# ಕಾನನ

APRIL 2012

ನಿಸರ್ಗದೆಡೆಗೆ ಪಯಣ

## ಲೇಖನಗಳು



ಅನಿಸಿಕೆ


E-mail: kaanana.mag@gmail.com


ಮುಖಪುಟ: *Common Sailer*





# ಸಂಪಾದಕೀಯ

“ಉಯ್ಯೋ ಉಯ್ಯೋ ಮಳೆರಾಯ ಹೂವಿನ ತೋಟಕೆ ನೀರಿಲ್ಲ

ಬಾರೋ ಬಾರೋ ಮಳೆರಾಯ ಬಾಳೆ ತೋಟಕೆ ನೀರಿಲ್ಲ!!!. . . . .

ಎಂದು ಸಕಲ ಪ್ರಾಣಿ-ಪಕ್ಷಿ ಮತ್ತು ರೈತ ಸಮುದಾಯ ಮಳೆರಾಯನಲ್ಲಿ ಬೇಡುತ್ತಿದ್ದರೂ ಮಳೆರಾಯ ಮಾತ್ರ ಇನ್ನು ಇವರ ಕೂಗನ್ನು ಮನಸ್ಸಿಗೆ ಹಚ್ಚಿಕೊಂಡಂತೆ ಕಾಣುತ್ತಿಲ್ಲ. ಕಾಡಿನ ಬಹುಪಾಲು ಕೆರೆಗಳು ಇಂಗಿ ಹೋಗಿ ಸುಮಾರು ದಿನಗಳೇ ಆಗಿರುವುದರಿಂದ ಕಾಡಿನಲ್ಲಿರುವ ಸಕಲ ಪ್ರಾಣಿ-ಪಕ್ಷಿಗಳು ಕುಡಿಯಲು ನೀರು ಸಿಗದೆ, ಕಾಡ್ಗಿಚ್ಚೆಂಬ ರಾಕ್ಷಸನಿಂದ ಬೆಂದು ಸುಣ್ಣವಾಗಿರುವ ಕಾಡಿನಲ್ಲಿ ಹುಲ್ಲು ಸಿಗದೆ ಪ್ರಾಣ ಉಳಿಸಿಕೊಳ್ಳಲು ಹೆಣಗಾಡುತ್ತಿವೆ. ಮನುಷ್ಯ ಇಷ್ಟು ಸುಂದರವಾದ ಪರಿಸರವನ್ನು  ಉಳಿಸಿಕೊಳ್ಳದೆ ಆಧುನೀಕರಣ, ನಗರೀಕರಣ, ಹಣ ಎಂಬ ಹುಚ್ಚು ಕುದುರೆಯನ್ನು ಏರಿ ಓಡುತ್ತಿರುವುದರ ಕಾರಣದಿಂದಲೇ ಸಮಯ ಸಮಯಕ್ಕೆ ಮಳೆಯಾಗದೆ ಕುಡಿಯುವ ನೀರಿಗೆ ನಿದ್ರೆಮಾಡದೆ ರಾತ್ರಿಯೆಲ್ಲಾ ಕಾಯುವ ಸಂಭವ ಬಂದೊದಗಿದೆ. ಇದನ್ನು ನೋಡಿದರೆ ನನಗೆ ನಾವು ಕುಳಿತಿರುವ ರಂಬೆಯನ್ನೆ ನಾವೇ ಕೈಯಾರ ಕಡಿದುಕೊಂಡು ಬೀಳುತ್ತಿದ್ದೇವೆ ಎಂದೆನಿಸುತ್ತದೆ. ಏಪ್ರಿಲ್ 22 ***“ವಿಶ್ವ ಭೂಮಿ ದಿನ”*** ಇದು ನಮ್ಮ ಭೂಮಿ, ಇದು ನಮ್ಮ ಮನೆ! ಇದಲ್ಲದೆ ನಮಗೆ ಸೂರು ಇಲ್ಲ ನೆರಳೂ ಇಲ್ಲ ಇದನ್ನು ಕಾಪಾಡುವುದು ಪ್ರತಿಯೊಬ್ಬನ ಕರ್ತವ್ಯ ಇದನ್ನು ಅರಿಯದೆ ನಾವು ನಮ್ಮ ಸ್ವಾರ್ಥಕ್ಕೋಸ್ಕರ ಭೂಮಿಯನ್ನು ಮೈನಿಂಗ್, ಮರಳು ಪಿಲ್ಟರ್ಗಳು ಮುಂತಾದ ದುಷ್ಕೃತ್ಯಗಳನ್ನು ಎಸಗುತ್ತಾ ಸಾಗಿದರೆ ಇಡಿ ಭೂಮಿಯೇ ಬರಡಾಗಿ ಸಕಲ ಮನುಷ್ಯರೂ ಜೀವಿಗಳು ನಾಶವಾಗುತ್ತದೆ ಎಂಬುದರಲ್ಲಿ ಎರಡು ಮಾತಿಲ್ಲ.

ಕಳೆದ ಸಂಚಿಕೆಯಲ್ಲಿ ಜೀವಿಗಳ ವಿಕಾಸದ ಬಗ್ಗೆ ಸಾಕಷ್ಟು ಆಧಾರವನ್ನು ಒದಗಿಸುವ  ಪಳೆಯುಳಿಕೆಗಳ ಬಗ್ಗೆ ಮುರಳಿಯವರು “ಹಂಟಿಂಗ್” ಎಂಬ ಲೇಖನದಲ್ಲಿ ಸವಿಸ್ತಾರವಾಗಿ ಹೇಳಿದ್ದರು. ಈ ಬಾರಿ ಇವರು ತಮ್ಮ ***“ಹಂಟಿಂಗ್”*** ಲೇಖನವನ್ನು ಮುಂದುವರಿಸುತ್ತಾ ಅವರ ಗೈಡ್ಇಲ್ಲದ ಫಾಸಿಲ್ (ಪಳೆಯುಳಿಕೆ) ಬೇಟೆಯನ್ನು ಸುಂದರವಾಗಿ ಚಿತ್ರಿಸಿದ್ದಾರೆ.

ಮುದುಕ ಬೀಮಯ್ಯನು ಹಕ್ಕಿಗಳನ್ನು ಹಿಡಿಯುವುದೆಂದರೆ ಚಿಟಿಕೆ ಹೊಡೆದಷ್ಟು ಸುಲಭ, ಸುತ್ತಮುತ್ತಲಿನ ಕಾಡು, ಕುರುಚಲು, ಹಳ್ಳ-ಕೊಳ್ಳಗಳಲ್ಲಿ ನಿರ್ಗಳವಾಗಿ ಗೌಜುಗ ಮತ್ತು ಇತರ ಹಕ್ಕಿಗಳನ್ನು ಹಿಡಿದು ಸಂತೆಗಳಲ್ಲಿ ವ್ಯಾಪರ ಮಾಡಿ ಹಣವನ್ನು ಗಳಿಸುತ್ತಿದ್ದ ಪರಿಯನ್ನು ಅಶ್ವಥ್ ರವರು ***ಹಕ್ಕಿ ಲೋಕ***ದಲ್ಲಿ ಚಿತ್ರಿಸಿದ್ದಾರೆ.

ಮಕ್ಕಳಿಗಾಗಿಯೇ ಇರುವ ***ವಿ ವಿ ಅಂಕಣ***ದಲ್ಲಿ ಈ ಬಾರಿ ಕೋತಿಗಳು ಇಂಗ್ಲೀಷ್ ಕಲಿಯಬಲ್ಲವು ಎಂದು ಹೇಳುವ ***“ಬಬೂನ್ ಇಂಗ್ಲಿಷ್”*** ಎಂಬ ಶೀರ್ಷಿಕೆಯಡಿಯಲ್ಲೂ, ವಿಷಕಾರಿ ಪಕ್ಷಿ ಹಾಗೂ ವಿಷಕಾರಿ ಇಲಿಯ ಬಗ್ಗೆ ತಿಳಿಸುವ ***“ಆ ವಿಷಕಾರಿ!”*** ಎಂಬ ಶೀರ್ಷಿಕೆಯಡಿಯಲ್ಲಿ ಬಲು ಆಶ್ಚರ್ಯಕರ ವಿಷಯವನ್ನು ವಿವರವಾಗಿ ತಿಳಿಸಿದ್ದಾರೆ.

ನಮ್ಮ ಉಳಿವಿಗೆ ಸೂರ್ಯ ಭೂಮಿಯೇ ಕಾರಣ ಈ ದೇವತೆಗಳಿಗೆ ನಮಸ್ಕರಿಸುವುದು ನಮ್ಮೆಲ್ಲರ ಕರ್ತವ್ಯ. ಸೂರ್ಯನ ಕಾರ್ಯವನ್ನು ನಾಗರಾಜ್ ರವರು ತಮ್ಮ ***“ಒಡಲ ಕಂದ”*** ಎಂಬ ಕವನದಲ್ಲಿ ಸುಂದರವಾಗಿ ಹೇಳಿದ್ದಾರೆ.



ಅರಣ್ಯ, ವನ್ಯಜೀವಿ, ಪರಿಸರ ಸಂರಕ್ಷಣೆ, ವಿಜ್ಞಾನ, ವನ್ಯಜೀವಿ ಛಾಯಾಚಿತ್ರ,ಕವನ, ಕಥೆಗಳು ಹಾಗೂ ಲೇಖನಗಳನ್ನು  ತಾವೂ ಕಾನನಕ್ಕೆ ಬರೆಯಬಹುದು.

**ಇ–ಮೇಲ್ ವಿಳಾಸ: kaanana.mag@gmail.com**

**Wildlife Conservation Group**



# ಹಂಟಿಂಗ್

ಮುಂದುವರೆಯುವುದು. . . . . . . . .

ಮೊದಲನೇ ಟ್ರಿಪ್ ಅಪರಿಪೂರ್ಣ ಎಂದೆನೆಸಿ, ಮುಂದಿನ ವರ್ಷ ಅದೇ ಸಮಯಕ್ಕೆ ಎಲ್ಲ ಪ್ಲಾನ್ ಮಾಡದೆಯೇ ರೆಡಿಯಾದೆವು. ಯಾರಿಗೂ ಫೋನ್ ಮಾಡಲೇ ಇಲ್ಲ ದಾಸ್ ಗಂತೂ ಮಾಡಬಾರದೆಂದು ಡಿಸೈಡ್ ಮಾಡೇ ಬಿಟ್ಟಿದ್ದೆವು. ದಾಸ್ ನಮ್ಮ ಜೊತೆಗೆ ಇದ್ದರೆ ಅದು ಲಿಮಿಟೆಡ್ ಡೌನ್ ಲೋಡ್ ಇದ್ದ ಹಾಗೆ.

ಹಳೆ ನೆನಪುಗಳು 'ಅಚ್ಚಾ'ಗಿದ್ದರಿಂದ ಅವುಗಳ ಆಧಾರದ ಮೇಲೆಯೇ ಕಲೆಕ್ಟ್ ಮಾಡಲು ನಿರ್ಧರಿಸಿದ್ದೆವು. ಆದರೆ ಮೊದಲೇ ಬೇಕಾದ್ದ ಗೂಗಲ್ ಮ್ಯಾಪ್ ಗಳು, ಟೂರಿಸ್ಟ್ ಮ್ಯಾಪ್ ಇತ್ಯಾದಿ ಸಂಗ್ರಹಿಸಿದ್ದೆವು. ಬೆಂಗಳೂರಿನ ಸರ್ವೇ ಅಥಾರಿಟಿಯಲ್ಲಿ ಟೊಪೋಶೀಟ್ ಗಳನ್ನು ಕಲೆಕ್ಟ್ ಮಾಡಿ ತಂದಿದ್ದೆ, ಅಬ್ಬಾ! ಏನು ಡೀಟೈಲ್ಸ್ ಅಂತೀರಾ 1980 ಸರ್ವೇ ಇರಬೇಕು. ನಮಗೆ ಬೇಕಾದನ್ನು ಅಶ್ವಥ ಸೆಲೆಕ್ಟ್ ಮಾಡಿ ಹಳೇ ಮೆಮೋರಿ ರೀಕ್ಯಾಪ್ ಮಾಡಿಸಿಕೊಂಡೆವು.

ಸ್ಕಾರ್ಪಿಯೋ ಬುಕ್ ಮಾಡಿ ನಮ್ಮ ಬಟ್ಟೆ ಬರೆ, ಟೆಂಟ್ ಗಳು, ಸ್ಲೀಪಿಂಗ್ ಬ್ಯಾಗ್ಸ್, ಗ್ಯಾಸ್ ಸ್ಟವ್ , ವಾಟರ್ ಟ್ಯಾಂಕ್, ರೇಷನ್ ..... ದೇಶಾಂತರ ಹೊರಟೆವು. ಮತ್ತದೇ ಧಗೆ, ಸೆಕೆ. ನೀರಿನ ಟ್ಯಾಂಕ್ ಇದ್ದದ್ದರಿಂದ ಖರ್ಚು ಉಳಿಸಲಾಯಿತು. ಅಲ್ಲಲ್ಲಿ ನಿಲ್ಲಿಸಿ ತಿಂಡಿ, ಊಟ, ಎಳನೀರು ಕಾಫಿ ಅಂತೂ ಕೇಳಲೇಬೇಡಿ, ಸೇವನೆಯಾಯಿತು. ಕೈಯಲ್ಲಿ ಮ್ಯಾಪ್ ಇದ್ದದ್ದರಿಂದ ಮತ್ತದೇ ರೂಟ್ ಯಾಕೆಂದು ಅಡ್ಡ ದಾರಿ ಹಿಡಿದು ಬೇಗ ಅರಿಯಲೂರು ಸೇರಿದೆವು. ಈ ಬಾರಿ ತಿರುಚಿ ಕಡೆಗೆ ತಿರುಗಿಸಲಿಲ್ಲ ನಮ್ಮ ಜಿಯಾಗ್ರಾಫರ್ ಜೊತೆಯಲ್ಲಿದ್ದಾರೆ ಎಂದರೆ ನಮಗೆ ನಿರಾಳ. ಅದು ಎಂಥಾ ಕಾಡೆ ಇರಲಿ ದಾರಿಹುಡುಕುವ ಮ್ಯಾಪಿಂಗ್ ಬ್ರೈನ್ ಬಹಳ ಚೆನ್ನಾಗಿದೆ. ಈ ಸರಿ ಉಲ್ಟಾ ರೂಟ್ ಹಿಡಿದಿದ್ದರಿಂದ ದಾರಿ ತಪ್ಪಿದ ಮಕ್ಕಳಂತಿದ್ದೆವು. ಜಿಯಾಗ್ರಾಫರ್ ಸಾಹೇಬರು ಎಲ್ಲ ಫೈನಲೈಸ್ ಮಾಡಿ, ಮೊದಲ ಸೈಟ್ ಕಾರ್ಯೆ ಕಡೆಗೆ ಹೊರಟೆವು. ಟೊಪೋಶೀಟ್ನಲ್ಲಿ ಬಹಳ ನಿಖರವಾಗಿ ಒಂದು ಚಿಕ್ಕ ಸೇತುವೆ, ಕುಂಟೆ,



ಹುಣಸೆ ಮರ ಇತ್ಯಾದಿಗಳ ಪಕ್ಕ ಡೀಟೈಲ್ಸ್ ಇರುತ್ತದೆ. ಸಮುದ್ರ ತಳದ ಕಾರೈನಲ್ಲಿ ಅಲೆದಲೆದಾಡಿ ಅನೇಕ ನಿಕ್ಷೇಪಗಳನ್ನು ಕಲೆಕ್ಟ್ ಮಾಡಿ ನಮ್ಮ ಪ್ಲಾಸ್ಟಿಕ್ ಗೋಣಿ ಬ್ಯಾಗ್ ಗಳಲ್ಲಿ ತುಂಬಿ ಸ್ಕಾರ್ಪಿಯೋ ಡಿಕ್ಕಿಯಲ್ಲಿ ತುಂಬಿದೆವು. ದಾಸ್ ಇಲ್ಲದೇ ಇದ್ದದ್ದರಿಂದ ನಮ್ಮ ಫ್ರೀಡಮ್. ಸುಸ್ತಾಗುವ ತನಕ ತಿರುಗಾಡಿ ಅಕ್ಕ ಪಕ್ಕ ಸಿಕ್ಕ ಹಳ್ಳಿಗಳಲ್ಲಿ ವಿಚಾರಿಸಿದರೆ  ಏನು!, ಇಲ್ಲಿಯ ತರಹ ಕನಿಷ್ಠ ಪಕ್ಷ ಅಂಗಡಿ ಕೂಡ ಸಿಗುವುದು ಬೇಡವೇ. ಎಲ್ಲರೂ ಶಕ್ತೀ ಮೀರಿ ತಡೆದು ಸಾಗುವಾಗ ದಾರಿ ಮಧ್ಯದಲ್ಲಿ ಸಿಕ್ಕ ಊರೊಂದರಲ್ಲಿ  ನಮ್ಮ ಹಳೆ ಬೋಂಡಾ ಅಂಗಡಿ ಕಾಣಿಸಿತು. ಊರೊಳಗೆ ಸಾಗಿ ಹಳೆ ಜಾಗಗಳು ನೆನಪಿಗೆ ಹೊಳೆಯಿತು.  ಮೊದಲ ಸಲ ಮೀನಿನ ಅಚ್ಚೆಯಂತಿದ್ದ ಗುರುತನ್ನು ಫೋಟೋ ತೆಗೆಯದೆ ಪರಿತಪಿಸಿದ್ದೆವು. ಗಮನಿಸಿ ನೋಡಿದರೆ ಅದು ಮೀನಿನ ಅಚ್ಚೆಯಾಗಿರಲಿಲ. ನಮ್ಮ ಕಡೆ ಬರೀ ಕ್ರಿಟೇಷಿಯಸ್ ಕಾಲದ್ದು ಮಾತ್ರ ಇದ್ದವು.



ಗಾಡಿ ಒಳಗಡೆ ತಿರುಗಿಸಿ ಹರಿಯುವ ನೀರನ್ನು ದಾಟಿ ಸಮತಟ್ಟಾದ ಜಾಗದಲ್ಲಿ ಟೆಂಟ್ ಪಿಚ್ ಮಾಡಿದೆವು. ಊರಿನವರಿಗೆಲ್ಲ ನಾವು ತಿರುಗಾಡುವುದು ನೋಡಿ ಗವರ್ನಮೆಂಟ್ ನವರು ಏನೋ ಮಾಡಕ್ ಬಂದಿದ್ದಾರೇನೋ ಎಂಬ ಗುಮಾನಿ. ಯಾರೂ ಕೇಳಲಿಕ್ಕೆ ಧೈರ್ಯ ಮಾಡಲಿಲ್ಲ. ನಮ್ಮದು ಬೇರೆ KA-51 ಗಾಡಿ, ಕರ್ನಾಟಕ ವಂಡಿ ಡಾ ಡೈ ಎಂದು ಯಾರಾದರೂ ಗುಂಪುಗಾರಿಕೆ ಮಾಡಿಯಾರು ಎಂಬ ಅಂಜಿಕೆಯಿಂದಲೇ ಬೆಂಗಳೂರು ಬಿಟ್ಟಿದ್ದೆವು. ನಾವು ತಿರುಗಾಡಿದ ಹಳ್ಳಿಗಳಲ್ಲಿ ಎಲ್ಲರೂ ನಮ್ಮ ಗಾಡಿಯನ್ನೇ ನೋಡುತ್ತಿದ್ದರೂ ಕೆಲವರನ್ನು ಬಿಟ್ಟರೆ ಯಾರೂ ನಂಬರ್ ಪ್ಲೇಟಿನ ಕಡೆ ಕಣ್ಣು ಹಾಯಿಸಲಿಲ್ಲ. ನಮ್ಮ ಕಣ್ಣುಗಳು ಅವರ ಕಣ್ಣುಗಳನ್ನೇ ನೋಡುತ್ತಿದ್ದವು. ಒಂದು ರೀತಿಯಲ್ಲಿ ಅವರ ಕಣ್ಣುಗಳನ್ನು ಎಳೆದು ಹಿಡಿದಿದ್ದವೇನೋ ಎಂದನಿಸಿತು. ಈ ಪಡ್ಡೆ ಹುಡುಗರು ಕಲ್ಲುಗಳನ್ನು ಹುಡುಕಿ ದೇಶ ಸುತ್ತುತ್ತಿದ್ದಾರೆ, ಮದುವೆ ಇಲ್ಲ ಮಕ್ಕಳಿಲ್ಲ, ಸಂಪಾದನೆ ಇಲ್ಲ, ಮುಂದಕ್ಕೆ ದೇಶದ ಭವಿಷ್ಯ ಏನು! ಎಂಬ ಚಿಂತೆ ಹಳೆತಲೆಗಳ ಒಂದು ಗುಂಪಿನದು.

ನಮ್ಮ ಹೆಡ್ ಕುಕ್ ಶಂಕರಪ್ಪ ಅಡುಗೆಗೆಲ್ಲ ರೆಡಿ ಮಾಡಿ ಅನ್ನ ಬೇಯಿಸಲು ನೀರು ಬೇಕೆಂದಾಗ, ನೀರಿಗೇನು ಬರ ಪಕ್ಕದಲ್ಲೇ  ಹರಿಯುತ್ತಿರುವ ತೊರೆಯ ಕಡೆ ಹೊರಟೆವು. ದಣಿದ ದೇಹಕ್ಕೆ ನಿರೊಂದಿದ್ದರೆ ಸಾಕು ಮತ್ತೇನು ಬೇಡ. ಪ್ರಾಣ ಹೋಗುವ ಸಮಯದಲ್ಲೂ ಕಾಪಾಡುವಂತ ಮಾಯಾಶಕ್ತಿ ನೀರಿಗಿದೆ. ಕೈಕಾಲು ಮುಖ ತೊಳೆಯುವಾಗ ನಾಲಿಗೆಗೆ ನೀರಿನ ಹನಿಯೊಂದು ಬಿದ್ದಾಗಲೇ ಇಲ್ಲಿ ಸಮುದ್ರವಿತ್ತೆಂಬುದು ಖಾತ್ರಿಯಾಯಿತು. ಪಕ್ಕದ ಊರಿನಿಂದ ನಲ್ಲಿಯಲ್ಲಿ ನೀರು ಹಿಡಿದು ತಂದರೂ ಸ್ವಲ್ಪ ಉಪ್ಪುಪ್ಪೇ. ನಮ್ಮ ಬೇಳೆ ಬೇಯಿಸುವುದು ಕಷ್ಟವಾಯಿತು. ಡ್ರೈವರ್ ಕೂಡ ನಮ್ಮ ಪಾಡು ನೋಡಿ ಸಾಥ್ ನೀಡಿದ್ದರಿಂದ 8:30 ರ ಹೊತ್ತಿಗೆ ಎಲ್ಲ ಮುಗಿದೇ ಹೋಗಿತ್ತು. ಕರಡಿಗಳ ತರ ನಮ್ಮ ಟೆಂಟ್ಗಳಿಗೆ ನುಸುಳಿ ಜಿಪ್ ಎಳೆದಿದ್ದೇ ತಡ ರೆಪ್ಪೆಗಳು ಟೈಟ್ ಆದವು. ಬೆಳಕು ಹರಿಯುವ ಹೊತ್ತಿಗೆ ಕಾಫಿ ರೆಡಿ. ಆಹಾ! Awesome experience in that climate! MTR ಮಿಕ್ಸ್ ಬರುವ ಪ್ಯಾಕೆಟ್ ಗಳನ್ನು ತೆಗೆದುಕೊಂಡು ಹೋದರೆ

ಇಂತಹ ಟೈಮ್ ಕನ್ಸ್ಟ್ರೇಂಟ್ ಇರುವ ಟೈಮ್ ನಲ್ಲಿ ಬಹು ಉಪಕಾರಿ. ಅಕ್ಕಿ ಹಾಕಿದಾಗಲೇ ಕಲಸಿ ಬೇಯಿಸಿದರೆ ಒಳ್ಳೆಯ ಊಟ ಹೊಟ್ಟೆ ತುಂಬ ತಿನ್ನಬಹುದು.

ತಿಂಡಿ ರೆಡಿಯಾಗುವ ಮುನ್ನ ಒಂದಷ್ಟು ಕಲೆಕ್ಟ್ ಮಾಡೋಣವೆಂದು ನಾವು ತಂದಿದ್ದ ಪೇಲಿಯೋಲಿತಿಕ್ ಟೂಲ್ಸ್ ಗಳಿಂದ (ಮಾಮೂಲಿ ಸುತ್ತಿ, ಜಂಪರ್ ) ಕೆತ್ತಿ ತೆಗೆದೆವು. ಇದು ಹೇಗಿತ್ತೆಂದರೆ TV, Computer ರಿಪೇರಿ ಮಾಡಲು ಗೋಡೆ ದಬ್ಬುವ ಸುತ್ತಿಗೆ , ಕಟಿಂಗ್ ಪ್ಲಯರ್ ಉಪಯೋಗಿಸಿದ ಹಾಗಾಯಿತು. ಆದರೂ ಬಹಳ ನಾಜೂಕಾಗಿ ಕೆಲಸ ಮಾಡಿದೆವು.



ಒಂದು ದಿನದಷ್ಟು ಕೆಲಸ ಮಾಡಿದ್ದರೂ ನಮ್ಮ ಕಲೆಕ್ಷನ್ ಅಷ್ಟೇನೂ ಹೇಳಿಕೊಳ್ಳುವಷ್ಟಿರಲಿಲ್ಲ. ವಾಪಸ್ಸು ಬಂದು ತಿಂಡಿ ಮುಗಿಸಿ, ಸ್ನಾನಕ್ಕೆ ಜರಿಗಿಳಿದೆವು. ನಾವು ಕೊಂಡಿದ್ದ ಸೋಪು ಚೈನಾ ಐಟಂ ಅಥವಾ ಲೋಕಲ್ ಅನ್ನುವಷ್ಟರ ಮಟ್ಟಿಗೆ ನೀರು ಉಪ್ಪಾಗಿದ್ದು, ಒಂದು ಗುಳ್ಳೆ ನೊರೆಯೂ ಸಹ ಉತ್ಪಾದನೆಯಾಗಲಿಲ್ಲ.

ನೀರು ಕೊರೆದ ಜಾಡಿನಲ್ಲೇ ಹೋದರೂ ಮೊದಲೇ ಅನೇಕ ಟೀಮ್ ಗಳು ಸರ್ಚ್ ಮಾಡಿ ಗುಡಿಸಿ ಹೋಗಿದ್ದರು, ಇನ್ನು ನಮಗೆ ಅಳಿದುಳಿದವು. ಕೆತ್ತಿ ಕೆತ್ತಿ ಎಷ್ಟು ಅಂತ ತೆಗೆಯುವುದು. ತಿಂಗಳುಗಟ್ಟಲೆ ಕ್ಯಾಂಪ್ ಮಾಡಿದ್ದರೆ ಓಕೆ ಅನ್ನಬಹುದಾಗಿತ್ತು. ಆಫ್ರಿಕಾದಲ್ಲಿ ರಿಚರ್ಡ್ ಲೀಕಿ ತಂಡ ಹೀಗೆ ಕ್ಯಾಂಪ್ ಮಾಡಿದ್ದಾಗ ಆಕಸ್ಮಿಕವಾಗಿ 'ಲೂಸಿ' ಸಿಕ್ಕಿದ್ದು ದೊಡ್ಡ ಮಿಸಿಂಗ್ ಲಿಂಕ್ ಸೇರಿಸಿದ ಹಾಗಾಯಿತು. ಮಧ್ಯಾಹ್ನದ ವೇಳೆಗೆ ನೋಡಿದರೆ ನಮ್ಮ ಕಾಲೇಜ್ ಬ್ಯಾಗ್ ನ ಅರ್ಧ ಕೂಡ ತುಂಬಿರಲಿಲ್ಲ. ರಂಧ್ರಗಳಲ್ಲಿ ಬೆವರಿನ ಮುತ್ತುಗಳು ಹೊಮ್ಮಿ ಹನಿಹನಿ ಕೂಡಿದರೆ ಹಳ್ಳ ಎಂಬಂತೆ ಬೆವರಿನ ಕಲೆಕ್ಷನ್ ಚೆನ್ನಾಗಿತ್ತು. ಏನೋ ಮಬ್ಬು ಬಡಿದಂತಾಗಿ ಹಣೆ ಒರಸಿ ಮೇಲೆ ನೋಡಿದರೆ ಗ್ರಹಣ ಬಡಿದಿದೆ. ಓಹೋ! ನಮ್ಮ ಕಲೆಕ್ಷನ್ ಕಡಿಮೆಯಾಗಲು ಇದೇ ಕಾರಣ.




ಅಂದು ಭಾರತದಲ್ಲಿ ಪೂರ್ಣ ಸೂರ್ಯ ಗ್ರಹಣ. ಹೈಸ್ಕೂಲಿನಲ್ಲಿದ್ದಾಗ ಡೈಮಂಡ್ ರಿಂಗ್ ನೋಡಿದ್ದರ ನೆನಪಾಗಿ ಇಲ್ಲೂ ಆಗಬಹುದೆಂಬ ಕುತೂಹಲದಿಂದ ಕಾದು ಕುಳಿತೆವು. ನಾವಿದ್ದ ಕಡೆ 83% ಆಗಿತ್ತು. ಸರಿ ಊಟ ರೆಡಿ ಮಾಡಲು ಡ್ರೈವರ್ ಮತ್ತು ಹೆಡ್ ಕುಕ್ ಮೊದಲೇ ರೆಡಿಯಾಗಿದ್ದರು. ಊಟ ಮಾಡಿ ಎಲ್ಲಾ ಪ್ಯಾಕ್

ಮಾಡಿ ಇಲ್ಲಿ ಇನ್ನೇನು ಸಿಗುವುದಿಲ್ಲವೆಂದು ಹೊರಟೆವು. ಮೊಸರನ್ನು ಮಜ್ಜಿಗೆಗೆ ಕನ್ವರ್ಟ್ ಮಾಡಿ ಹೊಟ್ಟೆ ಬಲೂನ್ ತರಹ ಊದಿಕೊಂಡು ಗಾಡಿ ಮತ್ತು ಬಾಡಿ ಬ್ಯಾಲನ್ಸ್ ತಪ್ಪಿದಾಗಿಯಿತು. ಮುಂದೆ ನಮ್ಮ ಕಲ್ ಮರಮ್ ಇರುವ ಸಾತನೂರು ಅಕ್ಕ ಪಕ್ಕದ ಏರಿಯಾ ಬೀಟ್. 18 ಮೀಟರ್ ಟ್ರೀ ಫಾಸಿಲ್ ಮತ್ತೊಮ್ಮೆ ಧೀರ್ಘವಾಗಿ ನೋಡಿದೆವು. ಸಂಜೆ ಶುರುವಾಗುತ್ತಿದ್ದಂತೆ ಮೊಬ್ಬು ಕವಿದಂತೆ ಬೇಗ ಕ್ಯಾಂಪ್ ಸೈಟ್ ಹುಡುಕಬೇಕಾಗಿತ್ತು. ಜೋಳದ ಹೊಲಗಳ ಮಧ್ಯೆ ಜಾಗವೊಂದು ನಮ್ಮನ್ನು ಕೈಬೀಸಿ ಕರೆಯುತ್ತಿದ್ದಂತೆ ಎಲ್ಲರಿಗೂ ಭಾಸವಾಗಿ ಅಲ್ಲೇ ಪಿಚ್ ಮಾಡಿದೆವು.




ನಾಗರೀಕತೆ ನದಿ ದಡದಲ್ಲಿ ಶುರುವಾದಂತೆ ನಮ್ಮ ಟೆಂಟ್ ಇದ್ದ ಕಡೆ ನೀರಿನ ಜರಿ ಸಣ್ಣದಾಗಿ ಹರಿಯುತ್ತಿತ್ತು. ಬರುವ ಜಾಗದಲ್ಲಿ ಚಿಕ್ಕ ಚಿಕ್ಕ ತುಂಡುಗಳು ಬಿಟ್ಟರೆ ಬೇರೇನು ಸಿಗಲಿಲ್ಲ. ನಮ್ಮ ಎಲ್ಲಾ ಟೆಂಟ್ ಸೈಟ್ ಗಳಿಗೆ ಹೊಲಿಸಿದರೆ ಈ ಜಾಗದ ಅನುಭವ ಮನ ತಟ್ಟಿತು. ಕಾಫಿ ಕಾಯಿಸಿ, ನೀರು ಅವಣಿಸಿ ಊಟಕ್ಕೆ ತಯಾರಿ ನಡೆಸಿದೆವು. ಹಾಗೆಯೇ ಕೈ ಚಾಚಿ, ತಲೆ ಬಾಗಿಸಿ ಸ್ವಲ್ಪ ನೆಟಕೆ ತೆಗೆದು ತಲೆ ಕೈ ದಿಂಬು ತಾಗಿಸಿದರೆ ಜೆಟ್ ಬ್ಲ್ಯಾಕ್ ದಿಗಂತ. ಸುತ್ತ ಮುತ್ತ ಬೆಳಕಿನ ಮಾಲಿನ್ಯ ಇರದ ಕಾರಣ ಓರಿಯನ್ ನೆಬ್ಯೂಲ ಮತ್ತೆ Andromeda ಬರೀ ಗಣ್ಣಿಗೆ ಕಾಣಿಸುತ್ತಿದ್ದವು, ಶಿವನಹಳ್ಳಿಯಲ್ಲಿ ಈಗ ಅರ್ಧ ದಿಗಂತ ಬೆಳಕಿನ ಸುನಾಮಿಯಿಂದ ಮುಳುಗಡೆಯಾಗಿದೆ. ಒಂದೆರಡು ಲಾಂಗ್ ಎಕ್ಸ್ ಪೋಷರ್ ಚಿತ್ರಗಳು ಸುಮಾರಾಗಿಬಂದವು. ಸುತ್ತಮುತ್ತಲಿನ ಹವೆ ಆಹ್ಲಾದಕರವಾಗಿದ್ದರಿಂದ ಕೆಳಗೆ ಮುಳ್ಳಿನ ಹಾಸಿಗೆ ಇದ್ದರೂ ನಿದ್ದೆ ಸಲೀಸಾಗಿ ಹತ್ತಿತ್ತು. ಟೆಂಟ್ ಗಳ ಎಲ್ಲಾ ಜಿಪ್ ಎಳೆದು ಏನನ್ನೂ ಯೋಚಿಸದೇ ಸೀದಾ ನಿದ್ರಾಲೋಕಕ್ಕೆ ಕಾಲಿಟ್ಟೆವು. ಬೆಳಿಗ್ಗೆ ಎದ್ದು ಕಾಫೀ ಮಾಡಿ ಎಲ್ಲಾ ಮುಸುರೆ ತೊಳೆದು ತಿಂಡಿ ಮಾಡಿಕೊಂಡು ಮತ್ತೆ ಕ್ಲೀನಾಗಿ ಪ್ಯಾಕ್ ಮಾಡಿ ಹೊರಟೆವು.



ದಾರಿಯಲ್ಲಿ ಕಲೆಕ್ಷನ್ ಮಾಡಿಕೊಂಡು ಹೊರಟೆವು. ಫಾಸಿಲ್ ತರಹ ಇದ್ದ ಕಲ್ಲುಗಳಲ್ಲಿ ಮಂಟಪವೊಂದು ಕಟ್ಟಲಾಗಿತ್ತು. ಜೀವಿಗಳ ಕುರುಹು ಇಲ್ಲದ ಕಾರಣ ಆ ಕಲ್ಲುಗಳನ್ನು ಮುಟ್ಟಲಿಲ್ಲ, ಈ ಬಾರಿ ಒಂದು ಭಾರಿ ಗಾತ್ರದ ಕಲ್ಲು ಮರಮ್ ಸಿಕ್ಕಿದ್ದು ಸಂತಸದ ಸಂಗತಿ.

ಮುಂದಿನ ಊರೊಂದರಲ್ಲಿ ರಜೆ ಹೋಗಿದ್ದ ಹುಡುಗರಿಲ್ಲದ ಹಾಸ್ಟಲ್ ಬಳಿ ರೆಸ್ಟ್ ಮಾಡಿ ಮಧ್ಯಾಹ್ನದ ಊಟ ತಯಾರು ಮಾಡಿದೆವು. ವಾಚ್ ಮ್ಯಾನ್ ಕುಡಿದ ಅಮಲಿನಲ್ಲೇ ನಮ್ಮ ಡೀಟೈಲ್ಸ್ ಕಲೆಕ್ಟ್ ಮಾಡಿಕೊಂಡ. ನದಿ ಹರಿಯುವ ಕಾರಣ ಇದೇ ಹೈ ಟೆಂಷನ್ line ಕೆಳಗೆ ಹೋದರೆ ಸಿಗುವುದೆಂದು ಹೇಳಿದ. ಅವನ ಬಳಿ ಹುಡುಗರು ಕಲೆಕ್ಟ್ ಮಾಡಿಟಿದ್ದ ಹಲವು ಸ್ಪೆಸಿಮನ್ ತೋರಿಸಿದ. ಕ್ಲಿಯರ್ ಆಗಿದ್ದವುಗಳನ್ನು ಹೇಗೋ ಪುಸಲಾಯಿಸಿ ತೆಗೆದುಕೊಂಡೆವು. ಆ ಊರಿನಲ್ಲಿ ಯಾವುದೊ ಹಬ್ಬ ಇದ್ದದ್ದರಿಂದ ಬಿರಿಯಾನಿ ಕ್ಯಾರಿಯರ್ ಬಂದಿತು. ನಾವು ನಮ್ಮ ಊಟ ಕೊಟ್ಟರೂ ಮುಟ್ಟಲಿಲ್ಲ, ಆ ಸ್ಪೆಸಿಮನ್ ಗಳಿಗೆ ಕಾಸು ಕೊಟ್ಟರೂ ಮುಟ್ಟಲಿಲ್ಲ ಪುಣ್ಯಾತ್ಮ . ಸರಿ ನಾವೇಕೆ ಮೋಸಮಾಡುವುದೆಂದು ನಾವೇ 100 ರೂಪಾಯಿ ಕೊಟ್ಟು ಥ್ಯಾಂಕ್ಸ್ ಹೇಳಿ ಸರ್ಚಿಂಗ್ ಹೋದೆವು. ನದಿ ಜಾಡಿನಲ್ಲೇ ಮೂರು ನಾಲ್ಕು ಕಿಮೀ ನಡೆದರೆ ಹೊಲಗಳಲ್ಲಿ ಅನೇಕ ಬಿಳಿಮಿನೈಟ್ , ಬೈವಾಲ್ವ್ಸ ಗಳು ಸಿಕ್ಕಿದವು. ಸಾಕಷ್ಟು ಆಯ್ದುಕೊಂಡೆವು. ದೊಡ್ಡದೊಂದು ಅಮೋನೈಟ್ ನ್ನು, ಬೇರೆ ಟೀಮ್ ನವರು ಕೆತ್ತಿ ತೆಗೆಯಲು ಯತ್ನಿಸಿದ್ದರು. ಹರ ಸಾಹಸ ಮಾಡಿ ನಿಧಾನವಾಗಿ ತೆಗೆದ ನಂತರ ನಿಧಾನವಾಗಿ ಮೂರು ತುಂಡಾಯಿತು. ಸರಿ ಬ್ಯಾಗ್ ನಲ್ಲಿ ಹಾಕಿ ಕೊಂಡೆವು. ಆ ಊರು ಬಿಟ್ಟು ಹೈವೇ ಕಡೆ ಹೋಗಿ ಅರಿಯಲೂರು ಟೌನ್ ಸುತ್ತಮುತ್ತ ತಿರುಗಾಡಿ ಖಾಲಿ ಲೇಔಟ್ ನಲ್ಲಿ ಸೈಟ್ ಗಳಿದ್ದ ಜಾಗ ನೋಡಿ ನಮ್ಮದೊಂದು ಸೈಟ್ ಇರಲಿ ಎಂದು ಟೆಂಟ್ ಹಾಕಲು ಸೆಲೆಕ್ಟ್ ಮಾಡಿದೆವು, ಜನಸಂಖ್ಯೆ ಸಿಕ್ಕಾಪಟ್ಟೆ ಇರುವ ನಮ್ಮ ದೇಶದಲ್ಲಿ ತುಂಡು ಜಾಗ ಯಾರಾದರೂ ಕೊಟ್ಟೆಯಾರ. ಟಾಲ್ ಸ್ಟಾಯ್ ಕಥೆ “ how much land does a m an need” ನೆನಪಾಯಿತು.




ದಾರಿಹೋಕಾರಲ್ಲಿ ಗುಸು ಗುಸು ಶುರುವಾಗಿ ಗಾಡಿಗಳು ಹಂಪ್ ಇಲ್ಲದೇ ಇದ್ದರೂ ನಿಂತು ನಿಂತು ಹೋಗುತ್ತಿದ್ದವು. ಕೊನೆಗೂ ಜನರು ಬಂದು ವಿಚಾರಿಸಿ ಬೆಳಿಗ್ಗೆ ಹೊರಡುತ್ತೆವೆಂದು ಹೇಳಿ

ಸಮಾಧಾನ ಪಡಿಸಿ ಊಟಕ್ಕೆ ರೆಡಿ ಮಾಡಿದೆವು. ಬೆಳಿಗ್ಗೆ ಬೇಗ ಎದ್ದು ಸಿಮೆಂಟ್ ಕಂಪನಿಗಳ ಕಡೆ ಹೊರಟೆವು, ಯಾರೋ ಹೇಳಿದ್ದರು ಅವರ ಗಣಿಗಳಲ್ಲಿ ಇಂತಹವು ಸಿಗುತ್ತವೆಂದು.

ಸೆಕ್ಯುರಿಟಿ ಒಳಕ್ಕೆ ಬಿಡಲಿಲ್ಲವಾದರೂ ಮ್ಯಾನೇಜರ್ ಬರುವ ತನಕ wait ಮಾಡಿದೆವು. ಒಳಗೆ ಬಿಟ್ಟರೆ ಗುಟ್ಟು ರಟ್ಟಾಗುವುದೆಂದು ಏನೇನೂ ಸಮಜಾಯಿಸಿ ಕೊಟ್ಟು ವಾಪಸ್ಸು ಕಳುಹಿಸಿದ. ತಿಂಡಿ ಕಟ್ಟಿಸಿಕೊಂಡಿದ್ದ ಅಂದು ತೋಪಿನಲ್ಲಿ ತಿನ್ನಬೇಕಾಯಿತು. ನಿನ್ನೆ ಹೋದ ಊರಿನ ಕಡೆಗೆ ವಾಪಸ್ಸಾಗಬೇಕಾಯಿತು. ಏನೋ ಹಬ್ಬ ಇದ್ದದ್ದರಿಂದ ಶಾಲೆಗಳಲೆಲ್ಲ ಕಾಂಪಿಟೇಷನ್ ಆಯೋಜಿಸಿದ್ದರು. ಸುಡು ಬಿಸಿಲಿನಲ್ಲೂ ನಿಯತ್ತಿಂದ ಮಕ್ಕಳಿಗೋಸ್ಕರ ಊರವರೆಲ್ಲ ಸೇರಿ ನಡೆಸುತ್ತಿದ್ದ ಕಾರ್ಯಕ್ರಮ ಅದು, ಮಜ್ಜಿಗೆ ಹುಡುಕಲು ಎರಡು ಮೂರು ಅಂಗಡಿಗಳಿಗೆ ಹೋದ ನಾವು ಸುಮ್ಮನೆ ಕಲ್ಲುಗಳ ಸ್ಯಾಂಪಲ್ ತೋರಿಸಿ ಸಿಗುತ್ತವ ಎಂದು ಕೇಳಿದರೆ ಮೂರ್ನಾಲ್ಕು ಅಡ್ರೆಸ್ ಸಿಕ್ಕಿತು. ನಿನ್ನೆ ಕುಡಿದಿದ್ದ ತಾತನ ನಷೆ ಕಡಿಮೆಯಾಗಿತೋ ಏನೋ ಎರಡು ಮೂರು ಕಡೆ ವಿಚಾರಿಸಿದ. ಸ್ವಲ್ಪ ಸಮಯ ಕಾದ ನಾವು, ಹುತ್ತದಿಂದ ಗೆದ್ದಲು ಹೊರ ಬಂದಂತೆ ಒಬ್ಬೊಬ್ಬರೇ ಹೊರ ಬಂದರು. ಅಪ್ರಿಕಾದಲ್ಲಿ ಹಿಂದೊಮ್ಮೆ ಬ್ರಿಟೀಷನೊಬ್ಬ ಅಲ್ಲಿನ ಮಕ್ಕಳು ಗೋಲಿ ಆಡುತ್ತಿದ್ದುದನ್ನು ನೋಡಿ ಬೆರಗಾದ, ಹೊಸ ರೀತಿಯ ಇಂಗ್ಲೆಂಡಿನಲ್ಲಿ ಎಲ್ಲೂ ಕಾಣದ ಆಟವದು. ವಿಶೇಷವೆಂದರೆ ಅವರು ಗೋಲಿಗಳ ಬದಲಾಗಿ ವಜ್ರಗಳಲ್ಲಿ ಆಟವಾಡುತ್ತಿದ್ದರು. ಅವರನ್ನು ನೈಸ್ ಮಾಡಿ ಮಿಠಾಯಿ ಕೊಟ್ಟು ವಜ್ರ ತೆಗೆದುಕೊಂಡು ಇಂಗ್ಲೆಂಡಿಗೆ ಮರಳಿ ದೊಡ್ಡ ಸೈನ್ಯ ಕರೆತಂದು ಆಫ್ರಿಕಾದಲ್ಲಿ ವಜ್ರದ ಗಣಿಗಳನ್ನು ಸ್ಥಾಪಿಸಿದ. ನಾವೇನು ಉದ್ಯಮ ಸ್ಥಾಪಿಸದಿದ್ದರೂ ನೂರು ಇನ್ನೂರು ಕೊಟ್ಟು ಅನೇಕ ಬೆಲೆ ಬಾಳುವ ಸ್ಯಾಂಪಲ್ಸ್ ಕಸಿದುಕೊಂಡೆವು.

ನಡೆಯುತ್ತಿರುವ ಕಾರ್ಯಕ್ರಮ ಬಿಟ್ಟು ತಮ್ಮ ತಮ್ಮ ಕಲೆಕ್ಷನ್ ತೋರಿಸಿ ಎಷ್ಟು ಕೊಟ್ಟರೆ ಅಷ್ಟು ಸಾಕು ಅನ್ನುವಂತೆ ಮಾರಾಟ ಮಾಡಿದರು. ಕೊನೆಯಲ್ಲಿ ನಮ್ಮ ಆನಂದಕ್ಕೆ ಪಾರವೇ ಇಲ್ಲದಿದ್ದಾಗ ಅಜ್ಜಿಯೊಬ್ಬಳ ಬಳಿ ಅನೇಕ ಸ್ಯಾಂಪಲ್ಸ್ ಇವೇ ಎಂದು ತಿಳಿಯಿತು. ಅಯ್ಯೋ ಯಾಕೆ ಬಿಡುವುದೆಂದು ಮನೆಗೆ ಹೋಗಿ ಭಾಷೆ ಬರುವುದಿಲ್ಲವೆಂದು ಮಾತನಾಡದೆಯೇ ಸುಮಾರು ಏಳು ನೂರು ರೂಪಾಯಿಗೆ ವ್ಯವಹಾರ ಕುದುರಿಸಿದೆವು. ಇದು ಮಾತ್ರ ಸ್ವಲ್ಪ ದುಬಾರಿಯಾಯಿತು (ಅಲ್ಲಿನ ದರಗಳಿಗೆ ಹೊಲಿಸಿದರೆ ಒಳ್ಳೆಯ ಸಂತಸ ತರುವ ಮೂಟೆ ಅದಾಗಿತ್ತು) ದಾಸ್ ಬೇರೆಯವರಿಗೆಲ್ಲ ಎಷ್ಟು ಮೋಸ ಮಾಡುತ್ತಾನೆ ಎಂದು ಆಗಲೇ ತಿಳಿದದ್ದು. ಕಳೆದ ಬಾರಿ ಚಾಕಚಕ್ಯತೆಯಿಂದ ಪರಿಚಯವಿದ್ದರೂ ಯಾರ ಬಳಿಯೂ ಮಾತನಾಡದೆಯೆ ಮುಂದೆ ಸಾಗಿದ್ದ, ನಮಗ್ಯಾರಿಗೂ ಸಂಶಯ ಬರಲೇ ಇಲ್ಲ. ನಾವು ಕನ್ನಡದವರೆಂದು ತಿಳಿದರೂ ಎಲ್ಲೂ ಆ ವಿಷಯ ಜನರ ಮನಸ್ಸಿನಲ್ಲಿ



ಬಾರದ ಕಾರಣ ನಮ್ಮ ಮನಸ್ಸಿನಲ್ಲೂ ಮರೆಯಾಯಿತು. ಅದೇ ಕರ್ನಾಟಕದಲ್ಲಿ ಯಾರಾದರೂ ತಮಿಳು ಗುಂಪು ಬಂದಿದ್ದರೇ ಸುಲಭ ಕೆಲಸವಲ್ಲವದು.  ಟಾಟಾ ಮಾಡಿದರು. ಇನ್ನೊಂದು ಆಲೋಚಿಸಿದೆ ಸಂತೃಪ್ತಿ ಯಿಂದ ಬೆಂಗಳೂರಿನ ದಾರಿ ಹಿಡಿದೆವು. ಬರುತ್ತ ಖುಷಿಯಿಂದ ಹೋಟೆಲ್ ಒಂದರಲ್ಲಿ ಊಟ ಮುಗಿಸಿ ಎಮ್ಮೆ ತುಂಬಿದ ಲಾರಿಯಂತೆ ಆರಾಮಾಗಿ ಊರು ಸೇರಿದೆವು.




- ಮುರಳಿ .ಎಸ್



# ಹಕ್ಕಿ ಲೋಕ

* ಹಕ್ಕಿಪಿಕ್ಕಿ ಬೀಮಯ್ಯ

ವೈಜ್ಞಾನಿಕ ಹೆಸರು: *Francilinus Pondicerianus*

ಇಂಗ್ಲೀಷ್ ಹೆಸರು : **Grey Froncolin**

ಮುದುಕ ಬೀಮಯ್ಯನು ಕರ್ರಗೆ ದುಂಡುದುಂಡಾಗಿ ಆಫ್ರೀಕಾದ ನಿಗ್ರೋಗಳನ್ನೆ ಹೋಲುವ ಗುಂಗುರು ಕೂದಲ ಗಿಡ್ಡ ಮನುಷ್ಯ, ಬೇಗಳ್ಳಿ ಹೊಲಗೇರಿ ಬೀದಿಯ ಕೊನೆ ಗುಡಿಸಲಿನಲ್ಲಿ ವಾಸವಾಗಿದ್ದ. ಈ ಮುದುಕನಿಗೆ ಎಲ್ಲರೂ *ಹಕ್ಕಿಪಿಕ್ಕಿ* ಎಂದು ಅಡ್ಡಹೆಸರಿಟ್ಟಿದ್ದರು. ಯಾಕಂತ್ತಿರಾ. . . .! ಇವನ ಊಟ, ಬಟ್ಟೆ, ಹಾಗೂ ಕಾಸು ಎಲ್ಲಕ್ಕೂ ಗವುಜುಗ, ಬೆಳವ, ಕಾಡುಕೋಳಿ, ಮುಂತಾದ ಹಕ್ಕಿಗಳನ್ನು ಹಿಡಿಯುವುದು ಇವನು ಚಿಕ್ಕಂದಿನಿಂದ ಮಾಡಿಕೊಂಡು ಬಂದ ನೇರ ಕಸುಬು.




ಬೇಗಳ್ಳಿಯಿಂದ ಇಪ್ಪತ್ತು ಕಿಲೋಮೀಟರ್ ದೂರ ಇರೋ ಆನೇಕಲ್, ಐದಾರು ಮೈಲಿ ದೂರ ಇರೋ ಕಗ್ಗಲೀಪುರ, ಹತ್ತದಿನೈದು ಕಿಲೋಮೀಟರ್ ದೂರ ಇರೋ ತಟ್ಟೆಕೆರೆವರೆಗೂ ಎಲ್ಲಾ ಜಾಗಗಳ ಸುತ್ತಮುತ್ತಲಿನ ಹೊಲ, ಗದ್ದೆ, ಬಯಲು, ಹಳ್ಳ-ಕೊಳ್ಳ, ಕಾಡು, ಕುರುಚಲು, ಮತ್ತು ತೋಪುಗಳಲ್ಲಿ ಸುತ್ತಾಡಿ ರಾಗಿ, ಜೋಳ, ಮತ್ತು ರೇಷನ್ ಸೊಸೈಟೀಲಿ ಕೊಡೋ ಗೋಧಿ, ಅಕ್ಕಿ ಮೊದಲಾದ ಕಾಳು-ಕಡಿಗಳನ್ನು ಹಕ್ಕಿಗಳಿಗೆ ಹಾಕಿ ತಿಂಗಳು ಗಟ್ಟಲೇ ಪಳಗಿಸಿ ಬಲೆಯಾಕಿ ಗುಂಪು ಗುಂಪಾಗಿ ಹಕ್ಕಿಗಳನ್ನು ಬೇಟೆಯಾಡಿ ಹಿಡಿಯುತ್ತಿದ್ದ. .

ಬೇಸಿಗೆ ಬಂತೆಂದರೆ ಹಳ್ಳ, ಕೆರೆ, ಕುಂಟೆಗಳಲ್ಲಿ ನೀರು ಇಂಗಿಹೋಗಿ ಗುಂಡಿಗಳಲ್ಲಿ ನೀರಿರುತ್ತಿರಲಿಲ್ಲ. ಅದರಲ್ಲೂ ವಾಜರಗುಡಿಸಲ ಪಕ್ಕದಲ್ಲೇ ಹಾದುಹೋಗುವ ಹಾವುಬಂಡೆ ಹಳ್ಳದಲ್ಲಿ ಸಣ್ಣ ಸಣ್ಣ ಗುಂಡಿಗಳಿದ್ದು, ಬೇಸಿಗೆಯಾದ್ದರಿಂದ

ದನ-ಕರುಗಳೆಲ್ಲ ಇದೇ ಹಳ್ಳಕ್ಕೆ ಬಂದು ನೀರು ಕುಡಿಯುತ್ತಿದ್ದರಿಂದ ಗುಂಡಿಗಳಲ್ಲಿನ ನೀರು, ಸ್ವಲ್ಪಮಟ್ಟಿಗೆ ಗೊಜ್ಜು-ಗೊಜ್ಜಾದ ಕೆಸರು ಗುಂಡಿಗಳಾಗಿದ್ದವು. ಇನ್ನು ಕೆಲವು ಸಣ್ಣ ಹಳ್ಳಗಳು ಬಿಸಿಲಿನ ತಾಪಕ್ಕೆ ಬತ್ತಿಹೋಗಿ ಬಿರುಕು ಬಿಟ್ಟಿದ್ದವು. ಸುತ್ತಮುತ್ತಲಿನ ಎಲ್ಲಾ ಪ್ರಾಣಿ-ಪಕ್ಷಿಗಳೂ ಕೂಡ ಇಲ್ಲೇ ನೀರಿಗಾಗಿ ಬರಬೇಕಿತ್ತು. ಜಲಚರ ಹಕ್ಕಿಗಳಿಗಂತೂ ಹಬ್ಬವೇ ಹಬ್ಬ ಬಿಡಿ, ಕೆಸರುನೀರಿನಲ್ಲಿ ಸುಲಭವಾಗಿ ದಕ್ಕುವ ಮೀನುಗಳನ್ನು ಯಾರು ತಾನೆ ಬಿಟ್ಟೆಯಾರು?.

ಮರಿಗನು ಸುಡುಬಿಸಿಲ ಬೇಸಿಗೆಯಲ್ಲಿ ಬಿಸಿಲು ನೆತ್ತಿಗೇರುವ ಒತ್ತಿಗೆ ಕಾಡಲ್ಲೆಲ್ಲ ಎಮ್ಮೆಗಳನ್ನು ಮೇಯಿಸಿಕೊಂಡು ಹಾವುಬಂಡೆಹಳ್ಳದ ಕಡೆ ನೀರು ಕುಡಿಸಲು ಹೊಡೆದುಕೊಂಡು ಹಳ್ಳದೊಂದು ದಿಬ್ಬದ ಮೇಲೆ ಕುಳಿತುಕೊಂಡ, ಜೇಬಿನಲ್ಲಿ ಕೈ ಸೇರಿಸಿ ಬೀಡಿಯನ್ನು ತೆಗೆದು ಬಾಯಿಗೆ ಇಟ್ಟುಕೊಂಡು ಆದೇನನ್ನೋ ಪೇಚಾಡುತ್ತಿದ್ದ, ಎಮ್ಮೆಗಳು ಗಿಡಗಳ ಪೊದರಿನಲ್ಲಿ ನುಸುಳಿ ಹೋಗುತ್ತಿದ್ದವು.

*"ಒಂದ್ತಾವ. . . ಮೆಯ್ತಾವ ಕಳ್ಳನ ನ್ಮಾಗ್ನೊವೂ. . . ತಾರಾಡ್ತವೆ"*

*" ಹೇ ಹೇ. . . ಬಾಆ . . .ಬಾ. . .ಬಾ ಇತ್ತ"*

ಎಂದು ಬಯ್ಯುತ್ತಾ ಬೀಡಿಗೆ ಬೆಂಕಿಯನ್ನಚ್ಚಿ ಸೇದುತ್ತಾ, ಪೇಚಾಡುತ್ತಾ ಕಣ್ಣ್ ಮುಂದೆ ಬರುವ ಸಣ್ಣ ಸಣ್ಣ ನುಸಿಗಳನ್ನು ಎಡಗೈಯಿಂದ ಓಡಿಸುತ್ತಾ ಸುಮ್ಮನೆ ನಿಶ್ಯಬ್ಧವಾಗಿ ಕುಳಿತ.

ಮರಿಗನು ಕುಳಿತ ಆ ದಿಬ್ಬದ ಮುಂದೆಯೇ ಇದ್ದ ಗುಂಡಿಗಳಲ್ಲಿ ನೀರು ಬಹಳ ಕಡಿಮೆ ಇದ್ದುದ್ದರಿಂದ ಗುಂಡಿಗಳಲ್ಲಿನ ಕೆಸರುನೀರಿನಲ್ಲಿ ಮೀನುಗಳು ಪಿಲಪಿಲ ಎಂದು ಪಿಲಗೂಡುತ್ತಿದ್ದವು, ಅವುಗಳನ್ನು ಸುಲಭವಾಗಿ ಹಿಡಿಯಲು ಗದ್ದೆಗೊರವ, ಮಿಂಚುಳ್ಳಿ, ಬೆಳ್ಳಕ್ಕಿ, ಬೆಳವ, ಮತ್ತು ಬಾತುಗಳು ಗಲಾಟೆ ಮಾಡುತ್ತಾ ಸುಲಭವಾಗಿ ತುತ್ತಾಗುವ ಮೀನುಗಳನ್ನು ಹಿಡಿದು ಉಗಾದಿಮಾಡುತ್ತಿದ್ದವು, ಇವುಗಳನ್ನು ನೋಡುತ್ತಿದ್ದ ಮರಿಗ *"ಮೀನುಗ್ಳು ಜೋರಾಗಿ ಇದ್ದಂಗವೇ ಹಳ್ಳದಾಗ ನನ್ ಮಗ್ನೋವು ಈ ಹಕ್ಕಿಗಳು ಬಸ ಬಸ ಅಂತ ತಿಂತವೇ. . .!"* ಎಂದು ಬಯ್ಯುತ್ತಾ ಬೀಡಿ ಸೇದುತ್ತಾ ಹಳ್ಳದಲ್ಲಿ ಮೀನುಗಳನ್ನು, ಹಕ್ಕಿಗಳನ್ನು ನೋಡುತ್ತಾ ಕುಳಿತ್ತಿರಬೇಕಾದರೆ. ಮರಿಗನ ಕಣ್ಣ್ ಮುಂದೆಯೇ ಸರ್ರನ ಭೂಮಿಯಿಂದ ದಾರವೊಂದು ಆ ಹಳ್ಳದ ದಿಬ್ಬದಿಂದ ಈ ಕಡೆ ದಿಬ್ಬಕ್ಕೆ ಹಾರಿತು. ಮೀನುಗಳನ್ನು ಭಕ್ಷಿಸುತ್ತಿದ್ದ ಹಕ್ಕಿಗಳೆಲ್ಲ ಆ ದಾರಕ್ಕೆ ಕಟ್ಟಿದ್ದ ಬಲೆಗೆ ಸಿಕ್ಕಿಕೊಂಡು ಚೀರುತ್ತಾ ಹಾರಲು ಪ್ರಯತ್ನಿಸುತ್ತಿದ್ದವು, ಎಲ್ಲಿಂದ ಬಂತು ಈ ಬಲೆ ಎಂಬ ಆಶ್ಚರ್ಯದಿಂದ ಓಡಿಹೋಗಿ ನೋಡಿದ ಮರಿಗ. ಬಲೆಯಲ್ಲಿ ಹಕ್ಕಿಗಳೆಲ್ಲ ಬಿದ್ದುಹೋಗಿದ್ದು ಹಾರಲು ಪ್ರಯತ್ನಿಸುತ್ತಿವೆ, ಬಲೆಯಿಂದ ಒಂದು ದಾರ ಎಲ್ಲೋ ದೂರದವರಿಗೂ ಹಾದು ಹೋಗಿದೆ, ಮರಿಗ ಅದನ್ನೇ ಹಿಂಬಾಲಿಸಿ ನಡೆದ. ಸ್ವಲ್ಪ ದೂರದಲ್ಲಿಯೇ ಒಂದು ಚೌಕಾಕೃತಿಯಂತಹ ಎಲೆ ಕಡ್ಡಿಗಳಿಂದ ಮಾಡಿದ್ದ *"ಹೈಡ್"* ಕಂಡು ಏನೋ ಕಿತಾಪತಿ ಇರಬೇಕು ಎಂದು ಸ್ವಲ್ಪ ಕುತೂಹಲ, ಭಯದಿಂದ ಹೈಡ್ ಬಳಿನಿಂತು ಒಳಗೆ ನೋಡೋಣ ಎಂದು "ಯಾರೋ ಬಲೆ ಹಾಕವ್ರೆ" ಎಂದು ಇಣುಕಿದ, ಮರಿಗನ ಶಬ್ಧವನ್ನು ಕೇಳಿಸಿಕೊಂಡು ಹಲ್ಲು ಕಿರಿಯುತ್ತಾ " ಅಣ್ಣೋ. . . ನಾನೇ ಕಾಣಣ್ಣೋ ಹಕ್ಕಿಹಿಡಿಯಾಕಾ" ಎಂದು ಹೈಡ್ ನಿಂದ ಎದ್ದು ಹೊರಕ್ಕೆ ಬಂದ ಬೀಮಯ್ಯ ಮುದುಕ!.




"ಏನೋ ಹಕ್ಕಿಪಿಕ್ಕಿ ಬುದ್ಧಿಯಿದಿಯಾ ನಿಂಗೆ? , ಎಮ್ಮೆಗಳಿಗೆ ಕಾಡಲ್ಲಿ ಕುಡಿಯೊಕೆ ಎಲ್ಲೂ ಒಂದು ತೊಟ್ಟು ನೀರಿಲ್ಲಾ ಅಂದ್ರೆ, ನೀನ್ ಬಂದು ಇಲ್ಲೇ ಹಕ್ಕಿಹಿಡಿತ್ತಿದ್ದಿಯಲ್ಲಾ, ಅದೂ ನೀರೆಲ್ಲ ಗಲಿಜ್ ಮಾಡಿ. . ." ಎಂದು ಬಯ್ಯುತ್ತ. . . ಸಂಜೆ ಎಮ್ಮೆಗಳನ್ನು ಮನೆಯ ಕಡೆ ಹೊಡೆದುಕೊಂಡು ಬಂದ, ಬೀಮಯ್ಯ ಮುದುಕ ಬಯ್ಯಿಸಿಕೊಂಡು ಹಕ್ಕಿಗಳನ್ನು ಹಿಡಿದುಕೊಂಡು ಹೋದ.

ನಾನು ಮಾರನೆಯ ಮಂಗಳವಾರದ ಸಂತೆಗೆ ತರಕಾರಿ ತರಲೆಂದು ಹೋದಾಗ ಗೌಜುಗ ವ್ಯಾಪಾರದ ಮುದುಕನ ಸುತ್ತಲೂ ಜನ ನೆರದಿರುವುದನ್ನು ನೋಡಿ ಚಕಿತನಾದೆ.

"ಯೋ ತಾತಪ್ಪ ಎಂಗೆ ಜೊತೆ" ಎಂದು ಕೇಳಿದೆ. ಅದಕ್ಕೆ "ಎಂಬತ್ ಎಂಬತ್ ಎಂಬತ್ತು ರೂಪಾಯಿ ಮಾತ್ರ ಸಾಮಿ ತಗೋಳಿ" ಎಂದ. "ಜೋಡಿ ಗೌಜು ಹಕ್ಕಿಗಳಿಗೆ ಎಂಬತ್ತು ರೂಪಾಯಿ ಬಾರಿ ದುಬಾರಿ ಆಯಿತು, ನಲವತ್ತು ಮಾಡಿಕೊಂಡು ಕೊಡು" ಎಂದೆ. "ಅಗಕ್ಕಿಲ್ಲ ಸಾಮಿ " ಎಂದ. "ಅರೇ ಮುದ್ಕ ನೀನೇನು ಕೊಂಡಕೋ ಬತ್ತೀಯೋ ಪುಗ್ಸಟ್ಟೆ ಕಾಡಲ್ಲಿ ಹಿಡಿದು ತರ್ತೀಯಾ ಅದಕ್ಕೆ ಅಷ್ಟು ಹಣಾನ ಬಾ ನೀನು ಕಾಡ್ ಕಡೆ ಫಾರೆಷ್ಟ್ರಿಗೆ ಹಿಡ್ಕೊಡ್ತೀನಿ" ಎಂದು ಬೆದರಿಸಿದೆ. "ಹೋಗ್ಲಿ ಅರವತ್ತು ರೂಪಾಯಿ ಕೊಡಿ ಸಾಮಿ" ಎಂದ. "ನನಗೇನ್ ಬ್ಯಾಡ ಬಾ ನೀನ್ ಕಾಡ್ ಕಡೆ" ಎಂದು ಬೆದರಿಸಿ ನೇರಾ ಮನೆಕಡೆ ಬಂದೆ.




ಗೌಜು ಹಕ್ಕಿಗಳ ಮಾಂಸ ಕೋಳಿಗಿಂತ ತುಂಬಾ ರುಚಿಯಾಗಿರುವುದರಿಂದ ಮುದುಕನ ಹಕ್ಕಿ ವ್ಯಾಪಾರ ಯಾವಾಗಲೂ ಬಲು ಜೋರು.

ಕೋಳಿಗಳಂತೆ  ಈ ಹಕ್ಕಿಗಳು ನೆಲದಲ್ಲೇ ಕಾಳುಗಳನ್ನು ಆಯುತ್ತಾ ನಡೆದಾಡುತ್ತಿರುತ್ತವೆ ಕೋಳಿಗಿಂತ ಸ್ವಲ್ಪ ಚಿಕ್ಕದಾದ ತಿಳಿ ಕಂದು ಬಣ್ಣದಿಂದ ಕೂಡಿದ್ದು, ಕತ್ತು ಎದೆ ಮತ್ತು ಹೊಟ್ಟೆ ಮಾಸಲು ಹಳದಿ, ಕಣ್ಣಿನ ಮೇಲೆ ಕಪ್ಪು ಗೆರೆ ಇದ್ದು, ಕೆಂಪು ಕಾಲುಗಳು ಮತ್ತು ಕೊಕ್ಕು ಕಪ್ಪು ಬಣ್ಣವಾಗಿರುತ್ತದೆ.

ಬನ್ನೇರುಘಟ್ಟದಂತದ ಕುರುಚಲು ಕಾಡು, ರಾಣಿ ಬೆನ್ನೂರಿನಂತಹ ಹುಲ್ಲುಗಾವಲು, ಮತ್ತು ನಂದಿ ಬೆಟ್ಟ ಮುಂತಾದ ಬಯಲು ಪ್ರದೇಶಗಳಲ್ಲಿ ಹೆಚ್ಚಾಗಿ ಕಾಣುತ್ತವೆ, ಇವು ಕಾಳು ಕಡಿಗಳನ್ನು  ಮೇಯುತ್ತಾ ನೆಲದ ಮೇಲೆ ನಡೆದಾಡುತ್ತವೆ. ಸದಾಕಾಲ ನಾಲ್ಕರಿಂದ ಎಂಟು ಮೊಟ್ಟೆಗಳನ್ನಿಟ್ಟು ಮರಿಮಾಡುತ್ತವೆ.

ಹಾವುಬಂಡೆ ಹಳ್ಳವು ಈಗ ಹಾಳಾಗಿ ಭೋಳಾಗಿದೆ ಬಿಡಿ!, ಬೆಳೆಯುತ್ತಿರುವ  ನಗರದ ಕಟ್ಟಡಗಳನ್ನು ಕಟ್ಟಲು ಬೇಕಾದ ಮರಳಿಗಾಗಿ ಹಾವು ಬಂಡೆಯ ಹಳ್ಳದಲ್ಲಿ ಅಕ್ರಮ ಮರಳು ಫಿಲ್ಟರ್ಗಳು   ತಲೆ ಎತ್ತಿದ್ದು, ಆ ಫಿಲ್ಟರ್ ಗಳಿಂದ ಬರುವ ರಾಡಿಯಾದ ನೀರಿನಲ್ಲಿ ಮೀನುಗಳಿಲ್ಲದೆ ಹಕ್ಕಿಗಳು ಕಡಿಮೆಯಾಗಿ ಹಕ್ಕಿ-ಪಕ್ಕಿಗಳನ್ನು ಹಿಡಿಯಲು ಬೀಮಯ್ಯ ಮುದುಕ ಸತ್ತು ಹತ್ತು-ಹದಿನೈದು ವರ್ಷಗಳೇ ಕಳೆದವು ಬಿಡಿ!



ವಿವಿ ಅಂಕಣ

# ವಿದ್ಯಾರ್ಥಿಗಾಗಿ ವಿಜ್ಞಾನ

## ಬಬೂನ್ ಇಂಗ್ಲೀಷ್




ಕಾಲ ಬದಲಾಗಿದೆ, ನಮ್ಮ ಮಕ್ಕಳು ಶಾಲೆಗೆ ಹೋಗಿ ಇಂಗ್ಲೀಷ್ ಕಲಿಯುವಂತೆ ಈಗ ವಿಜ್ಞಾನಿಗಳು ಬಬೂನ್ ಎಂಬ ಕೋತಿಯ ಮೇಲೆ ಪ್ರಯೋಗ ಮಾಡಿ, ಅವುಗಳೂ ಇಂಗ್ಲೀಷ್ ಕಲಿಯುವಂತೆ ಮಾಡಿದ್ದಾರೆ. ಅವುಗಳು ಈಗ ಅರ್ಥ ಇರುವ ಪದ ಯಾವುದು ಮತ್ತು ಅರ್ಥವಿಲ್ಲದ (TELK, DRAN) ಪದ ಯಾವುದು ಎಂದು ಗುರುತಿಸಬಲ್ಲವು.

ಗ್ರೈಂಗರ್ ಎಂಬ ವಿಜ್ಞಾನಿ 6 ಬಬೂನ್ ಗಳಿಗೆ ಸ್ವೇಯಿಚ್ಚೆಯಿಂದ ಕಂಪ್ಯೂಟರ್ ಉಪಯೋಗಿಸುವ ಅವಕಾಶ ಮಾಡಿಕೊಟ್ಟಿದ್ದಾನೆ. ಕಂಪ್ಯೂಟರ್ ಟಚ್ ಸ್ಕ್ರೀನ್ ಆಗಿದ್ದು ಅದರಲ್ಲಿ ನಾಲ್ಕು ಅಕ್ಷರಗಳ ಪದವೊಂದು ಮೂಡುತ್ತದೆ. ಅರ್ಥವಿರುವ ಪದದ ಮೇಲೆ ಮುಟ್ಟಿದಾಗ ತಿಂಡಿಯ ಬಹುಮಾನ ದೊರಕುತ್ತದೆ. ಹೀಗೆ 44 ದಿನಗಳಲ್ಲಿ ಅವು ಸುಮಾರು 50000 ಪರೀಕ್ಷೆಗಳನ್ನು ತೆಗೆದುಕೊಂಡವು. ಶೇಕಡಾ 75 ರಷ್ಟು ನಿಖರತೆ ಹೊಂದುವ ಫಲಿತಾಂಶ ಸಿಕ್ಕಿದ್ದು , 81 ರಿಂದ 308 ಹೊಸ ಪದಗಳನ್ನು ಅವು ಕಲಿತಿವೆ. ಸ್ಪೋಕನ್ ಇಂಗ್ಲೀಷ್ ಗೆ ಇಷ್ಟು ಸಾಕೋ ಏನೋ? ಮುಂದಕ್ಕೆ...

ಇವುಗಳು 'ಬೈಗ್ರಾಂ' ಎನ್ನುವ ಪದಗಳೊಳಗೆ ಬರುವ ಚಿಕ್ಕ ಪದಗಳನ್ನು (ಉದಾ: 'It',' te' in 'kite' and 'bite') ಇವು ಗುರುತಿಸಿ ನಿರ್ಧರಿಸುತ್ತವೆ ಎಂಬುದನ್ನು ಸಾಬೀತು ಪಡಿಸಿದ್ದಾರೆ. ಇದರಿಂದ ಇವು ಸುಮ್ಮನೆ ಜ್ಞಾಪಕ ಇಟ್ಟುಕೊಳ್ಳದೇ ಯೋಚಿಸಿ ನಿರ್ಧಾರ ಮಾಡುತ್ತವೆ ಎಂದು ತಿಳಿಯುತ್ತದೆ. ಮಾನವನಲ್ಲೂ ಇದೇ ರೀತಿಯ ಕಲಿಕೆಯಾಗುತ್ತದೆ.

ಈ ಪ್ರಯೋಗದಿಂದ ವಿಜ್ಞಾನಿಗಳು ಕಲಿಕೆ ಕಡಿಮೆಯಿರುವ ಮಕ್ಕಳಲ್ಲಿ ಕಾರಣ ತಿಳಿದುಕೊಳ್ಳುವ ಗುರಿ ಹೊಂದಿದ್ದಾರೆ.

# ಆ ವಿಷಕಾರಿ!

ನಾವು ನೀವು ZOO ನಲ್ಲಿರುವ ಕಾಳಿಂಗ ಸರ್ಪವನ್ನು ನೋಡಿದರೆನ್ನಿ, ಅವುಗಳಿಂದ ಸುರಕ್ಷತೆಯ ಅಂತರದಲ್ಲಿದ್ದರೂ ಮೈ ಜುಂ ಎನ್ನುತ್ತದೆ, ಜೀವಜಗತ್ತಿನಲ್ಲಿ ಇಂತಹ ವಿಷಕಾರಿ ಕೌತುಕಗಳು ಹಲವಾರು. ಕೊಮೋಡೋ ಡ್ರಾಗನ್ ಎಂಬ ದೈತ್ಯ ಹಲ್ಲಿ, ಪಿಟೋಹಿಸ್ಸೀ ಎಂಬ ಬಣ್ಣದ ಪಕ್ಷಿ, ಒಂದು ರೀತಿಯ ಪ್ಲಾಟಿಪಸ್. ಇವು ಈ ಅಂಕಣದ ವಿಶೇಷ ಅತಿಥಿಗಳು.

## ಕೊಮೋಡೋ ಡ್ರಾಗನ್




ಹೆಸರೇ ಸೂಚಿಸುವಂತೆ ಏನೋ ಭಯಾನಕ ಇರಬೇಕು. ಕೆಲವೇ ದ್ವೀಪಗಳಲ್ಲಿ ಕೆಲವೇ ಸಂಖ್ಯೆ ಇರುವ ಇವು ಬ್ಯಾಕ್ಟೀರಿಯಾ ಬಿಟ್ಟು ಕೊಲ್ಲುವುದು ಅಚ್ಚರಿಯ ಸಂಗತಿ. ಇವು ಮೂಳೆ ಸಹಿತ ತಿಂದು ಬಿಡುತ್ತವೆ. ಬೇರೆ ಸರೀಸೃಪಗಳಿಗಿರುವಂತೆ ಇವುಗಳ ಹಲ್ಲುಗಳು ರಚನೆಯಾಗಿಲ್ಲ. ಬ್ರಿಯಾನ್ ಫ್ರೈ ಎಂಬಾತ ಇವುಗಳನ್ನು MRI (ಸ್ಕ್ಯಾನಿಂಗ್) ಮಾಡಿ ನೋಡಿದ ಮೇಲೆ ಪ್ರತಿಯೊಂದು ಕಡೆ 6 ವಿಷ ಗ್ರಂಥಿಗಳಿರುವುದು ಕಾಣಿಸಿತು. ಇವು ತಮ್ಮ ಬೇಟೆಯ ಮಾಂಸವನ್ನು ತಮ್ಮ ಗರಗಸದಂತಹ ಹಲ್ಲುಗಳಿಂದ ತೂತು ಮಾಡುತ್ತವೆ. ಬೇಟೆ ಬಿಡಿಸಿಕೊಳ್ಳಲು ಯತ್ನಿಸಿದಾಗ ಇವೂ ಕೂಡ ಹಿಂಜರಿಯುತ್ತವೆ. ಈ ಕ್ರಿಯೆಯಿಂದ ವಿಷ ಆ ತೂತಿನಲ್ಲಿ ಶೇಖರಣೆಗೊಂಡು, ನಿಮಿಷಗಳಲ್ಲಿ ಹಬ್ಬಿ ಬೇಟೆ ಸಾಯುತ್ತದಂತೆ.

## ಹಾರ್ಟ್ ಅಟಾಕ್ ಪಕ್ಷಿ

ನಮ್ಮ ಭೂಮಿಯಲ್ಲಿ ಪಾಪು ನ್ಯೂಗ್ಯುನಿ ದ್ವೀಪ ಸಮೂಹಗಳು ಅತ್ಯಂತ ಜೀವಭರಿತ ಪ್ರದೇಶಗಳು. ಇವುಗಳಲ್ಲೊಂದು ಪಿಟೋಹಿಸ್ಸೀ (Pitohius) ಎಂಬ ಪಕ್ಷಿ. ಜಾನ್ ಡಂಬ್ಯಾಚಾರ್ ಎಂಬ ಖಗ ವಿಜ್ಞಾನಿ ಈ ಪಕ್ಷಿಯನ್ನು ಹಿಡಿದ ಕೂಡಲೇ ಸೀನು, ಕೆರೆತ ಶುರುವಾಗಿ ಕಣ್ಣು ಉರಿ ಬಂದು ನೀರು ಸೋರತೊಡಗಿತಂತೆ. ಅಲ್ಲಿರುವ ಆದಿವಾಸಿಗಳು ಇದೊಂದನ್ನು ಬಿಟ್ಟು ಬೇರೆ ಪಕ್ಷಿಗಳೆಲ್ಲವನ್ನು ತಿನ್ನುತ್ತಾರೆ.

ಈ ಪಕ್ಷಿಯ ಜೀವಕೋಶಗಳಲ್ಲಿ (bhatracotoxin) ವಿಷ ತುಂಬಿದ್ದು ಯಾವುದೇ ಜೀವಿ ಇದನ್ನು ತಿಂದಲ್ಲಿ ಅವುಗಳ ದೇಹದಲ್ಲಿ ನರಗಳ ಕಾರ್ಯ ನಿಂತುಹೋಗಿ ಹೃದಯಾಘಾತವಾಗುವುದು ಖಂಡಿತ. ವಿಜ್ಞಾನಿಗಳಿಗೆ ಇವು

ಒಂದು ಬಗೆಯ ದುಂಬಿಗಳನ್ನು ತಿಂದು ವಿಷ ಶೇಖರಿಸುತ್ತವೆ ಎಂದು ಗೊತ್ತಿದ್ದರೂ ಅಚ್ಚರಿಯ ವಿಷಯವೆಂದರೆ ಇವು ತಮ್ಮ ಮಾಂಸಖಂಡಗಳಲ್ಲಿ ವಿಷವಿದ್ದರೂ ಹೇಗೆ ಸಾಯದೇ ಬದುಕಿವೆ ಎಂಬುದು?



**ವಿಷ ಎಂಜಲು**



ಸಸ್ತನಿಗಳಲ್ಲೂ ಇಂತಹ ವಿಷಕಾರಿ ಗುಣ ಹಲವು ಪ್ರಾಣಿಗಳಲ್ಲಿ ಕಂಡು ಬರುತ್ತದೆ. ಆಫ್ರಿಕನ್ ಕ್ರೆಸ್ಟೆಡ್ ರಾಟ್ ಎಂಬ ಇಲಿ ತನ್ನ ದೇಹವನ್ನು ಮುಟ್ಟಿದ ಯಾವುದೇ ಜೀವಿಗೆ ವಿಷವಾಗಬಲ್ಲದು. ಇವು ವಿಷ ಉತ್ಪಾದನೆ ಮಾಡುವ ಬದಲಾಗಿ ಯಾವುದೋ ಮರದ ತೊಗಟೆಯನ್ನು ಅಗೆದು ಅಗೆದು ವಿಷದ ಜೊಲ್ಲು ತಯಾರಿಸಿ ತನ್ನ ಕೂದಲಿಗೇ ಲೇಪಿಸಿಕೊಳ್ಳುತ್ತವೆ. ಶತ್ರು ಬಂದಾಗ ಅನೇಕ ರೀತಿಯ ಸಂಜ್ಞೆಗಳನ್ನು ಕೊಡುತ್ತದೆ. ಯಾವುದಕ್ಕೂ ಬೆದರದೇ ಅದನ್ನು ತಿನ್ನಲೆತ್ನಿಸಿದಾಗ ವಿಷ ಕೆಲಸಮಾಡಿ ಬೇಟೆಗಾರ ಪ್ರಾಣಿ ಸತ್ತು ಹೋಗುತ್ತದೆ.

**ಪ್ಲಾಟಿಪುಸ್...**



ಕೌತುಕದ ವಿಷಯದಲ್ಲೊಂದು ಮೊಟ್ಟೆಯಿಡುವ ಸಸ್ತನಿಯಾದ ಪ್ಲಾಟಿಪಸ್. ಇವುಗಳು ಮೊಟ್ಟೆಯಿಟ್ಟು ಮರಿ ಮಾಡಿ ಹಾಲುಣಿಸುತ್ತವೆ. ಇವುಗಳು ಹಾವಿನಂತೆ ತನ್ನದೇ ಆದ ಸ್ವಂತ ವಿಷ ತಯಾರಿಸುವ ವಿಷಯ ಈಗ ಹೊರ ಬಂದಿದೆ. ಪ್ಲಾಟಿಪಸ್ ಗಳು ತಮ್ಮ ಹಿಂಗಾಲಿನಲ್ಲಿ ವಿಷ ಉತ್ಪಾದಿಸುವ ಮೂಳೆಯೊಂದು, ಕೂಡುವ ಸಮಯದಲ್ಲಿ ಉತ್ಪಾದನೆಯಾಗುತ್ತದೆಂದು ಕ್ಯಾಮಿಲ ಎಂಬುವವಳು ಕಂಡು ಹಿಡಿದಿದ್ದಾಳೆ. ಬೇರೆ ಪ್ರಾಣಿಗಳು ಇಂತಹ ಸಮಯದಲ್ಲಿ ಬೇಟೆಯಾಡಿದರೆ ಸಾವು ಖಚಿತ. ಎರಡು ಗಂಡುಗಳು ಜಗಳವಾಡಿದರೆ ಯಾವುದಕ್ಕೆ ವಿಷ ಒಳ ಹೋಗುತ್ತದೆ ಅದು ಸಾಯುವುದಿಲ್ಲವಾದರೂ ಲಕ್ವ ಹೊಡೆದಂತಾಗುತ್ತದೆ. ಬೇರೆ ಸಮಯದಲ್ಲಿ ಈ ಪ್ರಾಣಿಯನ್ನು ತಿಂದರೆ ಏನು ಆಗುವುದಿಲ್ಲ.



# ಒಡಲ ಕಂದ

ರವಿ ಬಂದ ಗಗನದಲಿ
ಬೆಳಕು ತಂದ ಭುವಿಯಲಿ
ತೆರೆಯುತ ಮನ ಜಗದಲಿ
ಕಾಲ ಚಕ್ರ ಧರೆಯಲಿ

ತಾಯ ಕಂದ ಮಡಿಲಲಿ
ತಾಯ ನಮಿಸಿ ನಡೆಯಲಿ
ಕಾರ್ಯ ಅದುವೆ ಹೃದಯದಲಿ
ಜೀವಿಗಳ ಜೊತೆಯಲಿ

ಏರುತಿರುವ ತೇಜ ಮೇಲೆ
ಚಟಪಡಿಸುವ ಸದ್ದಿನೊಡನೆ
ನೇಗಿಲೆಳೆವ ರಥದ ಒಡನೆ
ಬೆವರುತಿರುವ ಕಂದ ಕೆಳಗೆ

ತಾಯ ಒಡಲ ಹದವ ಮಾಡಿ
ತಾಯ ಮಡಿಲ ಸೇವೆ ಮಾಡಿ
ತಾಯ ಸೊಬಗ ಕಂಡು ಕಂದ
ಹರಡುವನು ಮಹಾನಂದ



ವಿಕೃತಿಯ ಅಳಿವಿಗಾಗಿ
ಪ್ರಕೃತಿಯ ಉಳಿವಿಗಾಗಿ
ಸಂಸ್ಕೃತಿಯ ತಿರುಳಿನಂತೆ
ಗತಿಸುತಿಹನು ಮಂಜಿನಂತೆ

ನಾಗರಾಜ್ ಆರ್ ಅಂಬಿಗ
ಸಿದ್ದಾಪುರ(ಉ.ಕ)

